

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2033
ಸದಸ್ಯರ ಹೆಸರು : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ
ಉತ್ತರಿಸುವ ದಿನಾಂಕ : 24-03-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಯ ಕ್ರೈಸ್ ಸಂಘದ ಖಾಯಂ ಸಿಬ್ಬಂದಿಗಳಿಗೆ ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠ ಮತ್ತು ಸರ್ಕಾರವು ಜಾರಿ ಮಾಡಿದ ಆದೇಶದಂತೆ ವಸತಿ ಶಾಲಾ ನೌಕರರಿಗೆ ಮುಂಬಡ್ತಿ ನೀಡಲು ವಿಳಂಬ ಮಾಡುತ್ತಿರುವುದಕ್ಕೆ ಕಾರಣಗಳೇನು; | ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠ ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಕಇ 19 ಮೊದೇಶಾ 2019, ದಿನಾಂಕ: 22.07.2019 ರ ಆದೇಶದಂತೆ ಮುಂಬಡ್ತಿ ನೀಡಲು ದಿನಾಂಕ 27.01.2021 ರಂದು ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ನಡೆಸಲಾಗಿರುತ್ತದೆ.<br><br>ಸದರಿ ಸಮಿತಿ ಸಭೆಯಲ್ಲಿ ನಿರ್ಣಯಿಸಿದಂತೆ ಹೈದರಾಬಾದ್ ಕರ್ನಾಟಕ ಪ್ರದೇಶದ ಸ್ಥಳಿಯ ಮೀಸಲಾತಿಗೆ ಸಂಬಂದಿಸಿದಂತೆ ಸಿಬ್ಬಂದಿ ಹಾಗೂ ಆಡಳಿತ ಸುಧಾರಣೆ ಇಲಾಖೆ (ಹೈದರಾಬಾದ್ ವಿಶೇಷ ಕೋಶ) ರವರಿಂದ ಅನುಮೋದನೆಗಾಗಿ ಮತ್ತು ಶಿಕ್ಷಕ ವೃಂದದಿಂದ ಪ್ರಾಂಶುಪಾಲರ ವೃಂದಕ್ಕೆ ಪದೋನ್ನತಿ ನೀಡುವಾಗ ಪಾಲಿಸಬೇಕಾದ ರೋಸ್ಟರ್ ಮೀಸಲಾತಿಗೆ ಸಂಬಂದಿಸಿದಂತೆ ರೋಸ್ಟರ್ ಮಿಸಲಾತಿ ನೋಡಲ್ ಏಜೆನ್ಸಿಯಾದ ಮಾನ್ಯ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರು ಇವರ ಅಭಿಪ್ರಾಯ ಕೋರಲಾಗಿದೆ. ಅಭಿಪ್ರಾಯ ಸ್ವೀಕೃತವಾದ ನಂತರ ಹೈದರಬಾದ್ ಕರ್ನಾಟಕ ಪ್ರದೇಶದ ಸ್ಥಳೀಯ ಮೀಸಲಾತಿ ಹಾಗೂ ರೋಸ್ಟರ್ ಮೀಸಲಾತಿಗೆ ಸಂಬಂದಿಸಿದಂತೆ ಅನುಮೋದನೆ ಪಡೆದು ಜರೂರಾಗಿ ಶಿಕ್ಷಕರಿಗೆ ಮುಂಬಡ್ತಿ ನೀಡಲು ಕ್ರಮವಹಿಸಲಾಗುವುದು. |
| ಆ) | ಕರ್ನಾಟಕ ನಾಗರೀಕ ಸೇವಾ ನಿಯಮ-1957 ರ ಸೇವಾ ಜೇಷ್ಠತಾ ನಿಯಮಗಳು ಕ್ರೈಸ್ ನೌಕರರಿಗೆ ಅನ್ವಯಿಸುತ್ತವೆಯೇ; (ವಿವರ ನೀಡುವುದು) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ನಿಯಮಗಳು-2011 ರಲ್ಲಿ ಕರ್ನಾಟಕ ಸರ್ಕಾರ ನಾಗರೀಕ ಸೇವಾ (ಜೇಷ್ಠತೆ) ನಿಯಮಗಳು 1957ರನ್ನು ಅಳವಡಿಸಿಕೊಳ್ಳಲಾಗಿದೆ. ಆದ್ದರಿಂದ, ವಸತಿ ಶಾಲಾ/ ಕಾಲೇಜುಗಳ ನೌಕರರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ-1957 ಅನ್ವಯವಾಗುತ್ತದೆ. |
| ಇ) | ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳ ಸಹಶಿಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ತಯಾರಿಸಿ, ಪ್ರಕಟಿಸಲಾಗಿದೆಯೇ; ಇಲ್ಲಾವಾದಲ್ಲಿ, ಜೇಷ್ಠತಾ ಪಟ್ಟಿ ತಯಾರಿಸುವಲ್ಲಿ ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು; | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿರುವ ವಸತಿ ಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಖಾಯಂ ಸಿಬ್ಬಂದಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:13.11.2020 ರಂದು ಪ್ರಕಟಿಸಲಾಗಿದೆ. |

| | | |
|---|---|---|
| ಈ) | ಶಿಕ್ಷಣ ಇಲಾಖೆಯ ಸಹ ಶಿಕ್ಷಕರುಗಳಿಗೆ ಬಡ್ತಿ ನೀಡುವಂತೆ ಜೇಷ್ಠತಾ ಪಟ್ಟಿಯ ಅನುಸಾರ ಸದರಿ ಸಹ ಶಿಕ್ಷಕರುಗಳಿಗೆ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡುವುದಕ್ಕೆ ಸರ್ಕಾರ ಏನಾದರೂ ಕ್ರಮಕೈಗೊಂಡಿದೆಯೇ: ಇಲ್ಲವಾದಲ್ಲಿ ಕಾರಣವೇನು; | ಉಪ ಪ್ರಶ್ನೆ "ಅ" ರಲ್ಲಿ ಉತ್ತರಿಸಿರುವಂತೆ ಕ್ರಮವಹಿಸಲಾಗುತ್ತಿದೆ. |
| ಉ) | ಖಾಲಿಯಿರುವ ಪ್ರಾಂಶುಪಾಲರ ಹುದ್ದೆಗಳಿಗೆ ಪ್ರತಿಶತ ಹುದ್ದೆಗಳನ್ನು ಮೀಸಲಿರಿಸಿ, ಸಹಶಿಕ್ಷಕರುಗಳನ್ನು ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಲಾಗುವುದೇ? | ಸರ್ಕಾರದ ಆದೇಶ ಸಂಖ್ಯೆ: ಸಕಇ 19 ಮೊದೇಶಾ 2019, ದಿನಾಂಕ: 22.07.2019 ರಂತೆ 75:25 (ಬಡ್ತಿ:ನೇರ ನೇಮಕಾತಿ) ಪ್ರತಿಶತ ಅನುಪಾತದಲ್ಲಿ ಮುಂಬಡ್ತಿ ನೀಡಲು ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ಸಕಇ 130 ಮೊದೇಶಾ 2021**

(ಬಿ. ಶ್ರೀರಾಮುಲು)
**ಸಮಾಜ ಕಲ್ಯಾಣ ಸಚಿವರು.**